# ಕಾನನ

ನಿಸರ್ಗದೆಡೆಗೆ ಪಯಣ



ಮುಖಪುಟ

ಆಸ್ಟೆನಿಯಮ್

ಪ್ರಸ್ತುತ ಅಂಕಿ–ಅಂಶಗಳ ಪ್ರಕಾರ ಪ್ರತೀವರ್ಷ ನಮ್ಮ ಭೂಮಿಯಲ್ಲಿನ ೧೫ ಬಿಲಿಯನ್ ನಷ್ಟು ಮರಗಳನ್ನು ಕಳೆದುಕೊಳ್ಳುತ್ತಿದ್ದೇವೆ... ಪ್ರಭಲವಾದ ಹವಾಮಾನ ಬದಲಾವಣೆಯಿಂದ ಅನಾವೃಷ್ಟಿಗೆ ಕಾರಣರಾಗಿದ್ದೇವೆ. ಏಪ್ರಿಲ್ ೨೨ "ವಿಶ್ವ ಭೂ ದಿನ" ಈ ಮಾತೃಭೂಮಿ ನೆನಪಿಗೆ ಬಂದಿದ್ದಾಳೆ. ಪುಟ್ಟದೊಂದು ಸಸಿನೆಟ್ಟು ಕೈತೊಳೆದುಕೊಳ್ಳುತ್ತಿದ್ದೇವೆ...!

ಏಪ್ರಿಲ್ 2017

WILDLIFE
CONSERVATION
GROUP



* ಆಹಾ... ... ... ಆಹಾರ
* ಬಿಳಿ ಮೈನಾ
* ಪ್ಲಾಸ್ಟಿಕ್ ಪ್ರಪಂಚ
* ನೇಸರ (ಕವನ)
* ಪ್ರಕೃತಿ ಬಿಂಬ


**ಲೇಖಕ ವೃಂದ**

ಶಶಿಧರಸ್ವಾಮಿ ಹಿರೇಮಠ

ಸ್ಮಿತಾ ರಾವ್

ಜೈಕುಮಾರ್ .ಆರ್

ನಂದಕುಮಾರ್ ಹೊಳ್ಳ

ಹರಿಹರನ್ .ಐ .ಎಸ್



**ವಿನ್ಯಾಸ**

ಅಶ್ವಥ .ಕೆ.ಎನ್

**ಮುಖಪುಟ ಛಾಯಾಚಿತ್ರ**

ವೃಜುಲಾಲ್ .ಎಮ್ .ವಿ

**ಪರಿಷ್ಕರಣೆ**

ಮುರಳಿ .ಎಸ್

ನಾಗೇಶ್ .ಓ .ಎಸ್



© ಕಾರ್ತಿಕ್ .ಎ .ಕೆ ಊಟಿ , ತಮಿಳುನಾಡು.

ಈ ನಮ್ಮ ಭೂಮಿ ತುಂಬ ಸುಂದರವಾದದ್ದು. ಅದು ನಮಗೆ ಎಲ್ಲವನ್ನು ಕೊಟ್ಟಿದೆ, ಉಸಿರಾಡಲು ಒಳ್ಳೆಯ ಗಾಳಿ, ಬಾಯಾರಿಕೆಗೆ ನೀರು, ಹಸಿವಿಗಾಗಿ ಊಟ, ವಾಸಿಸಲು ಮನೆ, ಮಾನಮುಚ್ಚಲು ಬಟ್ಟೆ ಹೀಗೆ ಎಲ್ಲವನ್ನು. ಆದರೆ ನಾವು...! ನಮಗೆ ಸಮವಾದ ಇತರೆ ಜೀವಿಗಳಿಗೆ...!, ಕೊನೆಪಕ್ಷ ಈ ಭೂಮಿಗೆ ನಾವು ಏನನ್ನು ಹಿಂದಿರುಗಿ ಕೊಟ್ಟಿದ್ದೇವೆ?. ಒಮ್ಮೆ ಯೋಚಿಸಿ, ನಾವು ಬಳಸಿ ಬಿಸಾಕಿದ ಸಾವಿರಾರು ವರ್ಷಗಳು ಕೊಳೆಯದ ಪ್ಲಾಸ್ಟಿಕ್ ಗಳು ಕೆರೆ, ತೊರೆ, ನದಿ, ಸಾಗರ, ಸಮುದ್ರಗಳಿಗೆ ಸೇರಿ ಮತ್ತು ಈ ನಮ್ಮ ಪೃಥ್ವಿಯ ಒಡಲೊಳಕ್ಕೆ ತುಂಬಿ ಮಲಿನಮಾಡುತ್ತಿವೆ. ಅದೇ ನಮ್ಮ ಉಡುಗೊರೆ ನೋಡಿ...!, ಸಾಗರಗಳಲ್ಲಿ ವಿಷವಾಗಿ ಪರಿಣಮಿಸುವ ಈ ತ್ಯಾಜ್ಯ ಕೋಟ್ಯಂತರ ಜೀವಿಗಳಿಗೆ ಮಾರಕವಾಗಿಹೋಗಿದೆ. ಈಗ ನಾವು ಪರಿಸರ ದಿನ, ಭೂ ದಿನ, ಸಾಗರ-ಸಮುದ್ರ ದಿನಗಳೆಂದು ಹಬ್ಬ ಮಾಡುತ್ತಿದ್ದೇವೆ. ಈ ನಮ್ಮ ಹಿರಿ ಜನಗಳಿಗೆ ಮನವರಿಕೆಮಾಡುವುದು ತುಂಬ ಕಷ್ಟ...! ಬದಲು ಮಕ್ಕಳಿಗೆ ಮಾಡಬಹುದು, ಅದು ಮುಂದೊಂದು ದಿನ ಪರಿಣಾಮಕಾರಿಯಾಗಬಲ್ಲದು. ಆಗ ಈ ಚಿತ್ರದಲ್ಲಿನಂತಹ (Horse Shoe Pit Viper) ಹಾವುಗಳಿಗೂ ಒಂದು ನೆಲೆ ಕಂಡಿತ...!. ಈ ನಮ್ಮ ಮಕ್ಕಳು ಹಾಗೇ ಉಳಿಸಿಕೊಡುತ್ತಾರೆ. ಅದೇ ಈ ವಿಶ್ವ ಭೂ ದಿನದ ಗುರಿಯೂ ಕೂಡ.



# ಆಹಾ... ಆಹಾರ

**ಪ್ರಕೃತಿ ಆಹಾರ ಸರಪಳಿಯ ಒಂದು ಕೊಂಡಿ**

ಇಕ್ಕೆಲಗಳಲ್ಲಿ ಬೆಳೆದುನಿಂತ ಚದುರಂಗ-ಕಳ್ಳಿಗಿಡಗಳ ಹಚ್ಚ ಹಸಿರಿನ ಇಕ್ಕಟ್ಟಾದ ಹಾದಿ. ಆ ದಾರಿಯಲ್ಲಿ ನುಸುಳಿಕೊಂಡು ನಾನು ನನ್ನ ಸಂಗಾತಿ ಕ್ಯಾಮೆರಾವನ್ನು ಹಿಡಿದು ಮುಂದೆ ಸಾಗುತ್ತಿದ್ದರೆ ನನ್ನ ಹಿಂದೆ ಕಾಶೀನಾಥ ಬರುತ್ತಿದ್ದರು. ದಟ್ಟವಾದ ಆ ಪೊದೆಯ ದಾರಿಯಲ್ಲಿ ಕೀಟಗಳ ಝೇಂಕಾರದ ನಿನಾದ ನಮ್ಮನ್ನು ಸ್ವಾಗತಿಸುತ್ತಾ ಮ್ಯಾಕ್ರೋ ಫೋಟೋಗ್ರಫಿಗೆ ಸ್ಫೂರ್ತಿ ಸೆಲೆಯಾಗಿತ್ತು. ನಾನು ಸೂಕ್ಷ್ಮ ನೋಟ ಬಿರುತ್ತಾ ಬೆಳೆದು ನಿಂತ ಆ ಹಸಿರು ಎಲೆಗಳ ಮೇಲೆ ದೃಷ್ಠಿ ನೆಟ್ಟು ನಿಧಾನವಾಗಿ ಮುಂದೆ ಸಾಗುತ್ತಿದ್ದೆ, ಸ್ವಲ್ಪ ದೂರ ಸಾಗಿದ ನಮಗೆ ಚದುರಂಗದ ಎಲೆಯ ಮೇಲೆ ಹಸಿರು ವರ್ಣದ ನೊಣ ಕುಳಿತಿರುವುದು ಕಾಣಿಸುತ್ತಿದ್ದಂತೆ ಕ್ಯಾಮೆರಾದ ಮ್ಯಾಕ್ರೋ ಲೆನ್ಸ್ ಅದರತ್ತ ಗುರಿ ಮಾಡಿ ಫೋಟೊ ಕ್ಲಿಕ್ಕಿಸ ತೊಡಗಿದೆವು ಎರಡು ಫೋಟೋ ಕ್ಲಿಕ್ಕಿಸುತ್ತಿದ್ದಂತೆಯೇ ಸುಯ್ಯನೇ ಹಾರಿ ಮಾಯವಾಗಿತ್ತು. ಅಯ್ಯೋ ಇನ್ನೂ ಒಳ್ಳೇ ಫೋಟೋ ಮಾಡಬೇಕಿತ್ತು ಎಂದು ಮನದೊಳಗೆ ಅಂದುಕೊಳ್ಳುತ್ತಿದ್ದಂತೇ ಮತ್ತೇ ಆ ಎಲೆಯ ಮೇಲೆ ಆ ನೊಣ ಪ್ರತ್ಯಕ್ಷ...! ನಿಧಾನವಾಗಿ ಹತ್ತಿರಕ್ಕೆ ಹೋಗಿ ಮತ್ತೇ ಕ್ಯಾಮೆರಾವನ್ನು ಅದರತ್ತ ಗುರಿ ಮಾಡಿ ಫೋಕಸ್ ಮಾಡಿ ನೋಡುತ್ತಿದ್ದವನಿಗೆ ಒಂದು ಅಚ್ಚರಿ ಕಾದಿತ್ತು ಅದುವೇ ಅದರ ಬಾಯಿಯಲ್ಲಿ ಸಣ್ಣ ಕೀಟವಿತ್ತು. ಈಗ ನನಗೆ ಅರ್ಥವಾಯಿತು, ಅದು ಸುಯ್ಯನೆ ಹಾರಿ ಹೋದದ್ದು ಈ ಸಣ್ಣ ಕೀಟವನ್ನು ಬೇಟೆಯಾಡಲು ಎಂದು. ಅದು ಬೇಟೆಯಾಡಿ ತಂದಿದ್ದ ಸೊಳ್ಳೆಯನ್ನು ನಿಧಾನವಾಗಿ ಸವಿಯತೊಡಗಿತು. ನಾನು ಆ ಕ್ಷಣಗಳನ್ನು ನನ್ನ ಕ್ಯಾಮೆರಾದಲ್ಲಿ ಸೆರೆ ಹಿಡಿಯತೊಡಗಿದೆ. ಈ ಹಸಿರು ನೊಣದ ಹೆಸರು ಉದ್ದಗಾಲಿನ ನೊಣ, ಇದರ ಫೋಟೋಗ್ರಫಿ ಒಂದು ಸವಾಲೇ ಸರಿ ಏಕೆಂದರೆ ನಾವು ಫೋಕಸ್ ಮಾಡಿ ಕ್ಲಿಕ್ಕಿಸುತ್ತಿದ್ದ ಹಾಗೇ ಅಲ್ಲಿಂದ ಪಟ್ಟನೆ ಹಾರಿ ಹೋಗಿ ಮತ್ತೊಂದು ಎಲೆಯ ಮೇಲೆ ಕುಳಿತುಕೊಳ್ಳುತ್ತದೆ. ಆಗ ನಮಗೆ ಖಾಲಿ ಎಲೆಯ ಫೋಟೊ ಮಾತ್ರ ಕ್ಯಾಮೆರಾದಲ್ಲಿ ಶೇಖರಣೆಯಾಗಿರುತ್ತದೆ. ಹಲವು ಪ್ರಯತ್ನಗಳನ್ನು ಮಾಡಿದರೆ ಒಂದೊ-ಎರಡೊ ಫೋಟೊ ಮಾತ್ರ ಚೆನ್ನಾಗಿರುತ್ತವೆ. ಅದು ನಿಧಾನವಾಗಿ ಆ ಸೊಳ್ಳೆಯನ್ನು ಭಕ್ಷಿಸುತ್ತಾ ತನ್ನ ಬಾಯಿಯ ಚುಚ್ಚುಗೊಳವೆಯ ಮೂಲಕ ಆಸ್ವಾದಿಸುತ್ತಾ ಹೊಟ್ಟೆಯೊಳಗೆ ಸೇರಿಸಿಕೊಂಡು ತನ್ನ ಆಹಾರ ಭಕ್ಷಿಸುವ ಕಾರ್ಯವನ್ನು ಮುಗಿಸಿತು.

ಸ್ವಲ್ಪ ಹೊತ್ತು ಅಲ್ಲೇ ಕುಳಿತು ಮುಂದಿನ ಬೇಟೆಯ ಬಗ್ಗೆ ಯೋಚಿಸಿ ತಲೆಯಲ್ಲಿ ಯಾವ ಬೇಟೆಯಾಡಬೇಕು ಎಂದು ಸ್ಕೆಚ್ ಹಾಕಿ ಅಲ್ಲಿಂದ ಹಾರಿ ಪಕ್ಕದಲ್ಲಿದ್ದ ಕಳ್ಳಿಎಲೆಯ ಮೇಲೆ ಕುಳಿತಿದ್ದ ಸಣ್ಣ ಕೀಟ ಹಿಡಿಯ ಬೇಕೆನ್ನುವಷ್ಟರಲ್ಲಿ ಎಲೆ ಕೆಳಗೆ ಅವಿತಿದ್ದ ಛದ್ಮವೇಷದಾರಿ, ನೆಗೆಯುವ ಜೇಡ, ಒಂದೇ ನೆಗೆತಕ್ಕೆ ಪಟ್ಟನೇ ನೆಗೆದು ಆ ಉದ್ದಗಾಲಿನ ನೊಣವನ್ನು ತನ್ನ ಬಿಗಿಯಾದ ರೋಮವುಳ್ಳ ಬಾಹುಗಳಿಂದ ಹಿಡಿದಪ್ಪಿ ಬೇಟೆಯಾಡಿತು,






ಮತ್ತೊಂದು ಬೇಟೆಯ ಹೊಂಚು ಹಾಕಿದ್ದ ಆ ಉದ್ದಗಾಲಿನ ನೊಣ ತಾನೇ ನೆಗೆಯುವ ಜೇಡಕ್ಕೆ ಆಹುತಿಯಾಗಿ ತಪ್ಪಿಸಿಕೊಳ್ಳಲು ಸಾಧ್ಯವಾಗದೆ ಬೇಟೆಯಾಗಿ ಆಹಾರವಾಯಿತು. ತನ್ನ ಶಕ್ತಿಯೆಲ್ಲಾ ಹಾಕಿ ಶತೃವಿನಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದ ಉದ್ದಗಾಲಿನ ನೊಣದ ಮೇಲೆ ತನ್ನ ವಿಷದ ಕೊಂಡಿಗಳಿಂದ ಚುಚ್ಚಿ ನಿತ್ರಾಣಗೊಳಿಸುವ ಮೂಲಕ ಪ್ರಾಣ ಪಕ್ಷಿಯನ್ನು ಹಾರುವಂತೆ ಮಾಡಿ ಬೇಟೆಯನ್ನು ಕೊಂದು ಜೇಡವು ದ್ರವಾಹಾರವನ್ನು ಹೀರುತ್ತಾ ಎಲೆಯ ತುಂಬೆಲ್ಲಾ ತಿರುಗಾಡುತ್ತಾ ಭಕ್ಷಣೆ ಮಾಡತೊಡಗಿತು. ನಾನು ಈ ಪ್ರಕೃತಿಯ ವೈಚಿತ್ರ್ಯವನ್ನು ಕ್ಯಾಮೆರಾ ಮಸೂರದ ಕಣ್ಣಿನಿಂದ ನೋಡಿ ಒಂದು ಕ್ಷಣ ದಿಗ್ಭ್ರಾಂತನಾಗಿ, ಹೌಹಾರಿ, ಅಬ್ಬಾ ಈ ಪ್ರಕೃತಿ ನಿಯಮ ಎಂತದ್ದು ಎಂದುಕೊಂಡು ನನ್ನ ದೃಶ್ಯಬೇಟೆಯ ಛಾಯಾಗ್ರಹಣವನ್ನು ಮುಂದುವರೆಸಿದೆ. ಹಾಗೇ ಬೇಟೆಯ ರಸಹಾರವನ್ನು ಭಕ್ಷಿಸುತ್ತಾ ಉಲ್ಲಾಸಭರಿತವಾದ ಜೇಡ, ಬೇಟೆಯನ್ನು ತನಗಿಷ್ಟ ಬಂದ ಹಾಗೇ ಉರಳಾಡಿಸಿ-ಹೊರಳಿಸಿ ಭಕ್ಷಿಸುತ್ತಾ ನನಗೆ ಫೋಟೋ ಬೇಟೆಗೆ ವಿವಿಧ ಭಂಗಿಯ ಪೋಸ್ ನೀಡ ತೊಡಗಿತು. ಈ ದೃಶ್ಯಗಳನ್ನು ನನ್ನ ಕ್ಯಾಮೆರಾದಲ್ಲಿ ಸೆರೆ ಹಿಡಿಯ ತೊಡಗಿದೆ, ಒಮ್ಮೆ ಜೇಡವು ನನ್ನ ಕ್ಯಾಮೆರಾದ ಮಸೂರದತ್ತ ನೇರ ನೋಟ ಬೀರಿದಾಗ ಅದರ ಹೊಳೆವ ಕಣ್ಣುಗಳ ಕಾಂತಿಗಳ ನೋಟ, ನನ್ನ ತಂಟೆಗೆ ಬಂದರೆ ಹಷಾರ್ ಎಂದು ಒಮ್ಮೆ ವಾರ್ನ್ ಮಾಡಿದಂತೆ ಭಾಸವಾಯಿತು. ನಮ್ಮಿಂದ ಅದಕ್ಕೆ ಯಾವ ತೊಂದರೆ ಇಲ್ಲ ಎಂದು ತಿಳಿದ ಜೇಡ ಹಾಗೇ ಎಲೆ ತುಂಬೆಲ್ಲಾ ಅಲೆದಾಡುತ್ತಾ ಬೇಟೆಯ ಸವಿಯನ್ನು ಮುಂದುವರೆಸಿತು, ನನ್ನ ಕ್ಯಾಮೆರಾ ಎಲ್ಲಾ ದೃಶ್ಯಗಳನ್ನು ದಾಖಲಿಸಿಕೊಳ್ಳುತ್ತಿತ್ತು.









ಗಾಳಿಯ ಬೀಸುವಿಕೆ ಸ್ವಲ್ಪ ಮಟ್ಟಿಗೆ ಜೋರಾದ ಹಾಗೆ ಬೇಟೆಯನ್ನು ಹೊತ್ತ ನೆಗೆಯುವ ಜೇಡವು ಎಲೆಯ ಕೆಳಗೆ ಮರೆಯಾಯಿತು. ಪೊದೆಯಲ್ಲಿ ಅರ್ಧ ಗಂಟೆಗೂ ಹೆಚ್ಚು ಹೊತ್ತು ನಡೆದ ಪ್ರಕೃತಿ ಆಹಾರ ಸರಪಳಿಯ ಚಿತ್ತಾರ ದೃಶ್ಯಗಳನ್ನು ಸೆರೆಹಿಡಿಯುವ ಸಮಯದಲ್ಲಿ ಸೊಳ್ಳೆಗಳು ನಮ್ಮನ್ನು ಕಚ್ಚಿದ್ದು ಗಮನಕ್ಕೆ ಬಾರದೆ ಹೋಗಿ ಮೈಯಲ್ಲಾ ಕೆಂಪಾಗಿ ತುರಿಕೆಯಾಗುತಿತ್ತು. ಜೇಡವು ಬೇಟೆಯ ಆಸ್ವಾದನೆಯಲ್ಲಿ ನಿರತವಾಗಿತ್ತು. ನಿಸರ್ಗದ ಕೌತುಕಗಳನ್ನು ಮೆಲಕುಹಾಕುತ್ತಾ ಪರಿಸರದ ಆಹಾರ ಸರಪಳಿಯಲ್ಲಿ ಒಂದು ಜೀವಿ ಇನ್ನೊಂದರ ಮೇಲೆ ಆಕ್ರಮಣ ಮಾಡಿ ಆಹಾರವಾಗಿ ಭಕ್ಷಿಸುವ ಪ್ರಕ್ರಿಯೆಯಿಂದ ಪರಿಸರ ಸಮತೋಲನವಾಗಿರಲು ಸಾಧ್ಯ. ಆದರೆ ಇದನ್ನರಿಯದ ಮಾನವರು ಪರಿಸರದ ಮೇಲೆ ನಿರಂತರ ದಾಳಿ ಮಾಡಿ ಪರಿಸರ ಮಾಲಿನ್ಯಕ್ಕೆ ಕಾರಣರಾಗಿದ್ದಾರೆ. ಗಿಡ-ಮರ ರಕ್ಷಣೆ ಜೊತೆಗೆ ಕೀಟ-ಪಕ್ಷಿ ವನ್ಯಜೀವಿಗಳ ಸಂರಕ್ಷಣೆ ಮಾಡುವುದು ನಮ್ಮ ನಿಮ್ಮೆಲ್ಲರ ಹೊಣೆಯಲ್ಲವೇ? ಎಂದು ಕಾಶೀನಾಥರಿಗೆ ಹೇಳುತ್ತಾ ಮುಂದೆ ನಡೆದೆ....

**ಉದ್ದಗಾಲಿನ ಹಾಗೂ ನೆಗೆಯುವ ಜೇಡದ ಬಗ್ಗೆ ಒಂದಷ್ಟು ವೈಜ್ಞಾನಿಕ ವಿವರಣೆ**

**ಉದ್ದಗಾಲಿನ ನೊಣ:-**

ಉದ್ದಗಾಲಿನ ನೊಣದ ದೇಹ ಹೊಳೆವ ಹಸಿರು ವರ್ಣದ ತೆಳು ನೀಳ ಆಕರ್ಷಕ ಮೈಮಾಟ ಹೊಂದಿದೆ. ದೇಹದ ತುಂಬೆಲ್ಲಾ ರೋಮಗಳಿವೆ, ಕೆಂಪಾದ ಸಂಕೀರ್ಣ ಕಣ್ಣುಗಳು, ಎರಡು ಜೊತೆ ಪಾರದರ್ಶಕ ರೆಕ್ಕೆಗಳಲ್ಲಿ ಕಪ್ಪಾದ ನರನಾಳಗಳಿದ್ದು ತುದಿಯಲ್ಲಿ ದಪ್ಪವಿದೆ. ಬಾಯಿಯಲ್ಲಿ ಸೂಜಿಯಂತೆ ಚೂಪಾಗಿರುವ ಚಿಕ್ಕದಾದ ಹೀರುಗೊಳವೆಯಾಕಾರದ ಚುಚ್ಚುವ ಅಂಗವಿದ್ದು ಇದು ಬೇಟೆಯನ್ನು ಹಿಡಿದು ಭಕ್ಷಿಸಲು ಸಹಾಯಕವಾಗಿದೆ. ಈ

ನೊಣದ ಇನ್ನೊಂದು ಆಕರ್ಷಣೆ ಸಂಧಿಗಳುಳ್ಳ (ಕೀಲುಗಳ) ಮೂರು ಜೊತೆ ಉದ್ದನೆಯ ಕಾಲುಗಳು, ಶಿರದಲ್ಲಿ ಎರಡು ತೆಳುವಾದ ಗ್ರಹಣಾಂಗಗಳಿವೆ. ಇವು ಒಂದರಿಂದ ಒಂಬತ್ತು ಮಿಲಿಮೀಟರ್ ಗಾತ್ರದಲ್ಲಿದ್ದು ಸಾಮಾನ್ಯವಾಗಿ ಐದು ಮಿಲಿಮೀಟರ್ ಗಾತ್ರದಷ್ಟು ಚಿಕ್ಕ ಕೀಟಗಳಾಗಿವೆ. ಈ ನೊಣಕ್ಕೆ ಆಂಗ್ಲ ಭಾಷೆಯಲ್ಲಿ ಲಾಂಗ್‌ಲೆಗ್ಡ್ ಫ್ಲೈ (Long Legged Fly) ಎಂದು ಕರೆದು, ಕೀಟ (Insecta) ವರ್ಗದ ನೊಣಗಳ (Diptera) ಡಿಪ್ಟೆರಾ ಗಣದ ಡೊಲಿಕೊಪೊಡಿಯೇ ಕುಟುಂಬಕ್ಕೆ (Dolichopodidae) ಸೇರಿಸಲಾಗಿದೆ. ಪ್ರಪಂಚದಾದ್ಯಂತ ಕಂಡು ಬರುವ ಇವು ಹೆಚ್ಚಾಗಿ ತಂಪಾದ ನೆರಳಿರುವ ಪೊದೆ, ಜೌಗು, ನದಿ ತಟ, ಹುಲ್ಲುಗಾವಲು, ಅರಣ್ಯ ಗದ್ದೆಗಳಲ್ಲಿರುವ ಸಣ್ಣಕೀಟಗಳನ್ನು ಬೇಟೆಯಾಡುತ್ತಾ ಜೀವಿಸುವುದನ್ನು ಕಾಣಬಹುದಾಗಿದೆ. ಮಿಲನದ ನಂತರ ಗಂಡು ಉದ್ದಗಾಲಿನ ನೊಣವು ತನ್ನ ಮುಂಗಾಲನ್ನು ತೋರಿಸುತ್ತಾ ಅನನ್ಯವಾದ ನಡುವಳಿಕೆಯನ್ನು ಹೆಣ್ಣು ನೊಣಕ್ಕೆ ವ್ಯಕ್ತಪಡಿಸುತ್ತದೆ. ನಂತರ ಹೆಣ್ಣು ನೊಣವು ತೇವಾಂಶ ಭರಿತ ಮಣ್ಣಿನಲ್ಲಿ ತನ್ನ ಮೊಟ್ಟೆಗಳನ್ನಿಡುತ್ತದೆ. ನಂತರ ಮೊಟ್ಟೆಯಿಂದ ಹೊರ ಬಂದ ಲಾರ್ವೆಯು ಸಣ್ಣ ಕೀಟಗಳನ್ನು ಭಕ್ಷಿಸುತ್ತಾ ಬೆಳದು ನಂತರ ಕಕೂನ್ ಆಗಿ ಮಾರ್ಪಟ್ಟು ತದನಂತರ ಪ್ರೌಢ ನೊಣವಾಗಿ ಆಹಾರಾನ್ವೇಷಣೆ ಹಾಗೂ ಸಂಗಾತಿಯನ್ನು ಅರಸುತ್ತಾ ಹಾರಾಡುತ್ತವೆ.

**ನೆಗೆಯುವ ಜೇಡ:-** ಈ ಜೇಡಕ್ಕೆ ನೆಗೆಯುವ ಅಥವಾ ಜಿಗಿಯುವ ಜೇಡಗಳನ್ನು ಎಂದು ಹೆಸರಿದ್ದು ಇವನ್ನು ಆಂಗ್ಲ ಭಾಷೆಯಲ್ಲಿ ಜಂಪಿಂಗ್ ಸ್ಪೈಡರ್ (Jumping Spider) ಎಂದು ಕರೆದು ವೈಜ್ಞಾನಿಕವಾಗಿ Hyllus semicupreus ಎಂದು ಹೆಸರಿಸಿ ಅರಾಕ್ನಿಡ (Arachnid) ವರ್ಗದ ಎಂಟು ಕಾಲುಗಳನ್ನು ಹೊಂದಿರುವ ಸಂಧಿಪದಿ (Arthropoda) ಸಂಧಿಗಳುಳ್ಳ (ಕೀಲುಗಳ) ಜೀವಿಗಳ ಗುಂಪಿಗೆ ಸೇರಿಸಲಾಗಿದೆ. ಈ ಜೇಡಗಳನ್ನು ಸಾಲ್ಟಿಸಿಡೇ (Salticidae) ಕುಟುಂಬಕ್ಕೆ ಸೇರಿಸಲಾಗಿದ್ದು, ಈ ಕುಟುಂಬದಲ್ಲಿ 500 ಪ್ರಬೇಧದಲ್ಲಿ 5000ಕ್ಕೂ ಹೆಚ್ಚು ಜಾತಿಯ ಜೇಡಗಳಿರುವ ಬಗ್ಗೆ ತಿಳಿದು ಬಂದಿದ್ದು, ಸಾಲ್ಟಿಸಿಡೇ ಕುಟುಂಬವು ಜೇಡ ಪ್ರಪಂಚದಲ್ಲಿಯೇ ಪ್ರತಿಶತ 13% ನ್ನು ಹೊಂದಿ ಅತೀ ದೊಡ್ಡ ಕುಟುಂಬವಾಗಿದೆ. ಜೇಡಗಳು ಬಲೆ ಹೆಣೆದು ಬೇಟೆಯಾಡುವುದು ಸರ್ವೆ ಸಾಮಾನ್ಯ ಆದರೆ ಈ ಜಾತಿಯ ಜೇಡಗಳು ಬಲೆಯನ್ನು ಹೆಣೆಯದೆ ಸಸ್ಯಗಳ ಎಲೆ-ಹೂಗಳ ಮೇಲೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ನೆಗೆಯುತ್ತಾ ತೆಳುವಾದ ರೇಷ್ಮೆಯಂತಹ ದಾರದ ದ್ರವವನ್ನು ಸ್ರವಿಸುತ್ತಾ ಅಲೆದಾಡುತ್ತಿರುತ್ತವೆ. ಈ ರೀತಿ ನೆಗೆಯಲು ಸಹಾಯಕವಾಗಬಲ್ಲ ಎಂಟು ಕಾಲುಗಳು ಸರಾಗವಾಗಿ ನೆಗೆಯಲು ಉಪಯುಕ್ತವಾಗಿವೆ. ಇವುಗಳ ಮುಖ್ಯ ವಿಸ್ಮಯ ಅಂಗ ಕಣ್ಣು, ತಲೆಯ ಭಾಗದಲ್ಲಿ ನಾಲ್ಕು ಜೊತೆ ಸಣ್ಣ ಕಣ್ಣುಗಳು ಹೊಂದಿದ್ದು, ಮುಖ್ಯ ಎರಡು ಕಣ್ಣು ದೊಡ್ಡದಾಗಿ ಮಾರ್ಪಟ್ಟಿದ್ದು ಬೇಟೆಯನ್ನು ವೀಕ್ಷಿಸಿ ಹಿಡಿಯಲು ಸಹಾಯಕವಾಗಿವೆ. ಇವುಗಳು ಹಗಲಿನಲ್ಲಿ ಚುರುಕಾಗಿದ್ದು ಹೆಚ್ಚು ಬೇಟೆಯಾಡುತ್ತವೆ. ಕಂದು ಮತ್ತು ಬಿಳಿ ವರ್ಣದ ಮೈ ಮೇಲೆ ಬಿಳಿ ರೋಮಗಳಿವೆ. ಈ ಜೇಡಗಳು ಕುರುಚಲು ಅರಣ್ಯ, ಉಷ್ಣಪ್ರದೇಶದ ಹಾಗೂ ಸಮಶೀತೋಷ್ಣದ ಅರಣ್ಯ, ತೋಟ ಹೂದೋಟಗಳಲ್ಲಿ ವಾಸಿಸುವುದು ಕಂಡುಬಂದಿದ್ದು. ಅಲ್ಲಿರುವ ಗಿಡಗಳ ಎಲೆ, ಹೂಗಳ ಮರೆಯಲ್ಲಿ ಅವಿತು ಕುಳಿತು ಅಲ್ಲಿಗೆ ಬರುವ ನೊಣ ಜಾತಿಯ ಕೀಟಗಳನ್ನು ಹಿಡಿದು ಭಕ್ಷಿಸುತ್ತವೆ.

ಚಿತ್ರ-ಲೇಖನ
ಶಶಿಧರಸ್ವಾಮಿ ಹಿರೇಮಠ,
ಹಾವೇರಿ ಜಿಲ್ಲೆ.





# ಬಿಳಿ ಮೈನಾ

ಹೊಸ ಪಕ್ಷಿಗಳ ಹುಡುಕಾಟ, ಹಾಗೇ ಅವುಗಳ ದನಿಯನ್ನು ಗುರುತಿಸುವುದು ಒಂದು ಅನುಭೂತಿಯೇ ಸರಿ. ಪ್ರತಿ ಸಲ ಹೊಸ ಜಾಗಕ್ಕೆ ಹೋದಾಗಲೂ ಕಾಣುವ ಹೊಸ ಪಕ್ಷಿಯು, ನೋಡಿರದ ಪಕ್ಷಿಗಳ ಸಾಲಿಗೆ ತನ್ನ ಹೆಸರನ್ನು ಸೇರ್ಪಡೆಗೊಳಿಸಿದಾಗ ಖುಶಿಯನ್ನು ಇಮ್ಮಡಿಗೊಳಿಸುತ್ತದೆ. ಈ ಸಲದ ನನ್ನ ಪಯಣವು ಗಂಗಾ ನದಿಯ ತಟದಲ್ಲಿರುವ ಅಲಹಾಬಾದ್ ನ ಕಡೆಗಿತ್ತು. ಈ ನಗರದಲ್ಲೇ ಗಂಗಾ-ಯಮುನಾ ನದಿಗಳ ಸಂಗಮವೂ ಇರುವುದರಿಂದ, ಇದು ಪುಣ್ಯಕ್ಷೇತ್ರವಾಗಿಯೂ ಪ್ರಸಿದ್ಧವಾಗಿದೆ.




ನಾನು ಉಳಿದುಕೊಂಡಿದ್ದ ಜಾಗವು ಗಂಗಾ ನದಿ ತೀರದಿಂದ ಬಹಳವೇ ಹತ್ತಿರವಿತ್ತು. ಜಲ ಪಕ್ಷಿಗಳು ಮೀನುಗಾರರ ತೆಪ್ಪದ ಬಳಿಯಲ್ಲಿ ಹಾರುವುದು ಸರ್ವೇ ಸಾಮಾನ್ಯವಾಗಿತ್ತು. ಇನ್ನು ನಾನು ತಂಗಿದ್ದ ಕ್ಯಾಂಪಸ್ ಅಂತೂ ವಿವಿಧ ಪಕ್ಷಿಗಳಿಂದ ಕಿಕ್ಕಿರಿದಿತ್ತು ಎಂದರೂ ಉತ್ಪ್ರೇಕ್ಷೆಯಾಗದು. ನವಿಲುಗಳು, ಪಾರಿವಾಳ, ಹೊರಸಲು ಹಕ್ಕಿ, ಕದುಗನ ಹಕ್ಕಿ, ಮಂಗಟ್ಟೆ, ಚಿಟ್ಟುಗುಟುರ, ಗಿಜಗಾರ್ಲು, ಹೂಗುಬ್ಬಿ, ಪಿಕಳಾರ, ಮೈನಾ, ಕಾಜಾಣ, ಗಿಳಿಗಳಿಂದ ತುಂಬಿರುತ್ತಿದುದಲ್ಲದೆ, ಇವು ಬೆಳಗಾಗುವುದರೊಳಗೇ ತಮ್ಮ ಚಟುವಟಿಕೆಯನ್ನೂ ಶುರುಮಾಡುತ್ತಿದ್ದವು. ಈ ಎಲ್ಲದರ

ಜೊತೆಗೆ ಇದ್ದ, ನಾನು ಹೇಳಲು ಹೊರಟಿರುವ ಇನ್ನೊಂದು ಪಕ್ಷಿಯೇ 'Asian Pied Starling' ಅಥವಾ ಬಿಳಿ ಮೈನಾ.

ಇದನ್ನು ನೋಡಿದೊಡನೆಯೇ ಮೈನಾ ಜಾತಿಗೆ ಸೇರಿದ್ದು ಎಂದು ಕಂಡು ಹಿಡಿಯುವುದು ಕಷ್ಟವೇನಾಗಲಿಲ್ಲ. ಯಾಕೆಂದರೆ ಹುಲ್ಲಿನ ರಾಶಿ ಮೇಲೆ ಮೊದಲ ಬಾರಿ ನೋಡಿದಾಗ ಇತರ ಮೈನಾಗಳ ಜೊತೆಗೇ ಹುಳ ಹುಪ್ಪಟೆಯನ್ನು ಹೆಕ್ಕಿ ತಿನ್ನುತ್ತಿತ್ತು. ಆದರೆ ಮೊದಲ ಬಾರಿಗೆ, ಇದು ತನ್ನನ್ನು ಹತ್ತಿರದಿಂದ ಗಮನಿಸುತ್ತಿದ್ದಾರೆ ಎಂದು ಗೊತ್ತಾದ ತಕ್ಷಣವೇ ಅಲ್ಲಿಂದ ಹಾರಿ ಹೋಯಿತು. ಹೀಗಾಗಿ ಸಾಮಾನ್ಯವಾಗಿ ಇಲ್ಲಿ ಕಾಣಸಿಗುವ ಮೈನಾದಷ್ಟು ಧೈರ್ಯವಿರುವ ಹಕ್ಕಿಯಲ್ಲ ಎಂಬುದು ಅರಿವಾಯಿತು. ನಂತರ ಇದ್ದ ಅಷ್ಟು ದಿನದಲ್ಲೂ, ನೋಡುವಾಗಲೆಲ್ಲಾ, ಗುಂಪು ಗುಂಪಾಗಿ ನೆಲದ ಮೇಲೆ ಏನನ್ನಾದರೂ ಹೆಕ್ಕಿ ತಿನ್ನುತ್ತಲೇ ಇತ್ತು.




ಕಪ್ಪು ಕಣ್ಣಿನ ಸುತ್ತ ಕಿತ್ತಳೆಯ ಬಣ್ಣವಿದ್ದು, ಕೊಕ್ಕಿನ ಅರ್ಧ ಭಾಗವೂ ಕಿತ್ತಳೆ ಬಣ್ಣವಿದ್ದು, ಉಳಿದ ಭಾಗ ತಿಳಿ ಹಳದಿಯಿಂದ ಕೂಡಿದೆ. ದೇಹದ ಮೇಲ್ಭಾಗ, ಕತ್ತಿನ ಭಾಗ ಕಪ್ಪಿದ್ದು, ಕೆಳಭಾಗ ಬಿಳಿಬಣ್ಣದ ಗರಿಗಳಿಂದ ಆವೃತವಾಗಿದೆ. ಹೀಗೆ ಗರಿಗಳ ಬಣ್ಣದ, ಗಾತ್ರದಲ್ಲಿನ ಅಲ್ಪ-ಸ್ವಲ್ಪ ವ್ಯತ್ಯಾಸದಿಂದಾಗಿ ಇದರ ಉಪಜಾತಿಯ ಪಕ್ಷಿಗಳಿಗಿಂತ ಭಿನ್ನವಾಗಿದೆ. ನೋಡಲು ಗಂಡು-ಹೆಣ್ಣುಗಳೆರಡೂ ಒಂದೇ ರೀತಿ ಕಾಣುತ್ತವೆ. ಸಾಮಾನ್ಯವಾಗಿ ಬಯಲಿನಲ್ಲಿ, ಹುಲ್ಲುಗಾವಲಿನಂತಹ ಪ್ರದೇಶದಲ್ಲಿ ಗುಂಪಾಗಿ ನೆಲದ ಮೇಲೆ ಬಿದ್ದ ಕಾಳು, ಜೇಡ, ಹುಳ, ಹುಪ್ಪಟೆಗಳನ್ನು ಹೆಕ್ಕಿ ತಿನ್ನುತ್ತದೆ.

ದನಿಯ ಅನುಕರಣೆಯಲ್ಲಿ ಇವು ಇತರ ಮೈನಾಗಳಿಗಿಂತ ಭಿನ್ನವಾಗಿ ನಿಲ್ಲುತ್ತವೆ. ಇವು ಶಿಳ್ಳೆ ಹೊಡೆಯಬಲ್ಲವು, ಇಂಪಾಗಿಯೂ ಕೂಗಬಲ್ಲವು. ಅಲ್ಲದೆ ತರಭೇತಿಯಿಂದಾಗಿ ಇವು ಮನುಷ್ಯನ ದನಿಯನ್ನು ಅನುಕರಿಸಬಲ್ಲ ಸಾಮರ್ಥ್ಯ ಹೊಂದಿರುವುದರಿಂದಾಗಿ, ಪಂಜರದಲ್ಲಿ ಸಾಕುವ ಪಕ್ಷಿಯಾಗಿಯೂ ಕಾಣಸಿಗುತ್ತದೆ!

ಇನ್ನು ಸಾಮಾನ್ಯವಾಗಿ ಮಾರ್ಚ್ ನಿಂದ ಸೆಪ್ಟೆಂಬರ್ ನ ತನಕವೂ ಗೂಡುಕಟ್ಟಿ, ಮರಿಗಳ ಪೋಷಣೆಗೆ ಸನ್ನದ್ಧವಾಗುತ್ತದೆ. ಸುಮಾರು ಮೂರರಿಂದ ಐದು ಮೆರುಗಾದ ನೀಲಿ ಬಣ್ಣದ ಮೊಟ್ಟೆಗಳನ್ನಿಡುತ್ತವೆ. ಹಾಗೇ ಗಂಡು-ಹೆಣ್ಣುಗಳೆರೆಡೂ ಮರಿಗಳ ಪಾಲನೆಯಲ್ಲಿ ಸಮಾನ ಪಾತ್ರವನ್ನು ವಹಿಸುತ್ತವೆ. ಭಾರತದ ಪೂರ್ವ ಭಾಗದಿಂದ ಆಂಧ್ರದವರೆಗೂ, ಬಾಂಗ್ಲಾದೇಶ, ಮಯನ್ಮಾರ್ ಗಳಲ್ಲೂ ತುಂಬಾ ಸಾಮಾನ್ಯವಾಗಿ ಕಾಣುವ ಪಕ್ಷಿ ಇದಾಗಿದೆ. ಮುಖ್ಯವಾಗಿ ಗಂಗಾನದಿಯ ಬಯಲಿನಲ್ಲಿ ಕಾಣಸಿಗುತ್ತಿತ್ತಾದರೂ, ಬದಲಾದ ಕೃಷಿ ಕ್ರಮ, ಹವಾಮಾನದಿಂದಾಗಿ ಇತರ ಪಕ್ಷಿಗಳಂತೇ ಇದೂ ಸಹ ಭಾರತದ ಇತರ ಭಾಗಗಳಲ್ಲಿ ಇಂದು ಕಾಣಸಿಗುತ್ತದೆ.

ಹೀಗೆ ಬಿಳಿ ಮೈನಾವು ಅಲ್ಲಿನ ಜಾಗಕ್ಕೆ ತುಂಬಾ ಸಾಮಾನ್ಯವಾದ ಪಕ್ಷಿಯಾದರೂ, ನಂಗೆ ವಿಶಿಷ್ಟವಾಗಿ ಕಂಡು, ಬೆರಗುಗಣ್ಣುಗಳಿಂದ ಇದ್ದಷ್ಟು ದಿನವೂ ಅದನ್ನು ಮರೆಯಲ್ಲಿ ನಿಂತು ನೋಡಿ ಬಂದದ್ದಂತೂ ಹೌದು.




- ಸ್ಮಿತಾ ರಾವ್,

ಶಿವಮೊಗ್ಗ.




'ಮುಂಜಾನೆ ಎದ್ದು, ನೋಡಲು ದೇವರ ಫೋಟೋ ಸಿಗದೆ ಕೈ ನೋಡಿಕೊಂಡು ಹಿಂದೆಂದೋ ಪ್ರೈಮೆರಿಯಲ್ಲಿ ಕಲಿತಿದ್ದ 'ಕರಾಗ್ರೇ ವರದೇ ಲಕ್ಷ್ಮಿ....' ಹೇಳಿ ದಿನ ಪ್ರಾರಂಭಿಸಿ. 1/2 ಬಾಟಲಿ ತುಂಬಾ ನೀರು ಹಿಡಿದುಕೊಂಡು ಕುಡಿದು, ಬ್ರಷ್ ಹಿಡಿದು 2 ನಿಮಿಷಕ್ಕಿಂತ ಹೆಚ್ಚು ಸಮಯ ಹಲ್ಲುಜ್ಜಬಾರದೆಂದು ಎಲ್ಲೋ ಓದಿದ್ದನ್ನು ನೆನಪಿಸಿಕೊಂಡು ಸುಮಾರು ಅಷ್ಟೇ ಸಮಯಕ್ಕೆ ಹಲ್ಲುಜ್ಜಿ, ಕ್ಲಿನಿಕ್ ಪ್ಲಸ್ ಶಾಂಪೂ ನಿಂದ ಸ್ನಾನ ಮಾಡಿ, ಶರ್ಟು ಪ್ಯಾಂಟು ತೊಟ್ಟು, ಬಾಚಣಿಗೆಯಿಂದ ತಲೆ ಬಾಚಿ, ಛೇ...ಸ್ವಲ್ಪ ಬೇಗ ಎದ್ದಿದ್ದರೆ ತಿಂಡಿ ತಿನ್ನಬಹುದಿತ್ತು ಎಂದು ನನ್ನನ್ನು ನಾನೇ ಶಪಿಸಿಕೊಂಡು, ಒಂದು ಪೆನ್ನು ಮತ್ತೆ ಒಂದೇ ಒಂದು ಬುಕ್ ಹಿಡಿದು, ಹಾಗೆ ಹಿಂಬದಿಯ ಜೇಬಿಗೆ ಕೈ ಹಾಕಿ ಪರ್ಸ್ ನಲ್ಲಿ ಬಸ್ ಪಾಸ್ ಇದೆಯೇ ಎಂದು ನೋಡಿಕೊಂಡು ಕಾಲೇಜ್ ಕಡೆಗೆ ಹೊರಟೆ'.

ಇದು ನನ್ನ ದಿನದ ಸಾಮಾನ್ಯ ದಿನಚರಿ. ನಿಮ್ಮ ದಿನಚರಿ ಸ್ವಲ್ಪ ವಿಭಿನ್ನವಾಗಿಯೇ ಇರಬಹುದು,ಆದರೆ ಹೆಚ್ಚು ಕಡಿಮೆ ಹೀಗೆ ಇರುತ್ತೆ ಅಲ್ವೇ..! ನಿನ್ನ ದಿನಚರಿ ಕಟ್ಕೊಂಡು ನಮಗೇನು!? ಅಂತೀರಾ... ಇಲ್ಲಿ



ಗಮನಿಸಬೇಕಾದ್ದು ನಮ್ಮ ದಿನಚರಿಯಲ್ಲಿ ನಾವು ಉಪಯೋಗಿಸುವ ವಸ್ತುಗಳು...! ಈಗಾಗಲೇ ಹೇಳಿದ ಹಾಗೆ ನಾವು ಉಪಯೋಗಿಸುವ ಬ್ರಷ್, ಪೆನ್ನು, ಶಾಂಪೂ ಪ್ಯಾಕೆಟ್, ಬಾಚಣಿಕೆ, ಪರ್ಸ್ ಹೀಗೆ ಇನ್ನೂ ಎಷ್ಟೋ ಪ್ಲಾಸ್ಟಿಕ್ ಸಾಮಾಗ್ರಿಗಳ ಮಧ್ಯೆ ನಮಗೆ ಗೊತ್ತಿಲ್ಲದ ಹಾಗೆ ನಾವು ಮುಳುಗಿ ಹೋಗಿದ್ದೇವೆ. ಹೇ... ಹೌದಲ್ವಾ? ಅನ್ನಿಸಬಹುದು. ಅಥವಾ "ಸರಿ! ಅದರಲ್ಲೇನಿದೆ ಎಲ್ಲರೂ ಇರೋದೇ ಹೀಗೆ ತಾನೇ...?" ಅಂತಲೂ ಅನಿಸಬಹುದು, ಆದರೆ ಹಾಗೆ ಹೇಳಿ ಸುಮ್ಮನೆ ತಳ್ಳಿಹಾಕೋ ಹಾಗಿಲ್ಲ.

ಅದರಿಂದ ನಮ್ಮ ಸುತ್ತಮುತ್ತಲಿನ ಪರಿಸರ ಹಾಗೂ ನಮಗೆ ಆಗುವ ಪರಿಣಾಮಗಳ ಬಗ್ಗೆ ಸ್ವಲ್ಪವಾದರೂ ಅರಿವಿರಬೇಕು.

ನಾವು ಉಪಯೋಗಿಸಿ ಎಸೆಯುವ ಪ್ಲಾಸ್ಟಿಕ್ ಎಲ್ಲಾ ಕೊನೆಗೆ ಎಲ್ಲಿ ಹೋಗಿ ತಲುಪುತ್ತದೆ? ಭೂಮಿಯೊಳಕ್ಕೋ..? ಕೆರೆಗೋ .., ನದಿಗೋ..., ಕೊನೆಗೆ "ಸಮುದ್ರಕ್ಕೆ". ಅಲ್ಲವೇ? ನಂತರ...? ನಮ್ಮ ನಮ್ಮ ದೈನಂದಿನ ಬದುಕೆ ಹೆಚ್ಚು ಮುಖ್ಯವಾಗಿದ್ದಾಗ ಇವುಗಳನ್ನೆಲ್ಲ ನಾವು ಯೋಚಿಸುವುದೇ ಇಲ್ಲ. ನಿಮಗೆ ತಿಳಿದಿರಬಹುದು ಪ್ಲಾಸ್ಟಿಕ್ ವಸ್ತುಗಳು ಸಣ್ಣ ಸಣ್ಣ ಕಣಗಳಾಗಿ ಭೂಮಿಗೆ ಸೇರಲು 100 ರಿಂದ ಕೆಲವು ಸಾವಿರ ವರ್ಷಗಳ ಕಾಲ ತೆಗೆದುಕೊಳ್ಳುತ್ತವೆ. ಹಾಗಾದರೆ ನಾನು ಅವುಗಳನ್ನು ಸುಟ್ಟು ಹಾಕುವೆ ಎಂದರೂ ಸಹ ಅದರಿಂದ ಹೊರಬರುವ ವಿಷಾನಿಲವು ಅಪಾಯಕಾರಿಯೇ. ಇದೊಂಥರಾ "ಬಿಸಿ ತುಪ್ಪ", ನುಂಗುವ ಹಾಗೂ ಇಲ್ಲ, ಉಗುಳುವ ಹಾಗೂ ಇಲ್ಲ.



ನಮ್ಮ ಪ್ರತಿ ದಿನದ ಪ್ಲಾಸ್ಟಿಕ್

ನಾವು ಉಪಯೋಗಿಸಿದ ಹಾಗೂ ಉಪಯೋಗಿಸದ ಹೆಚ್ಚು ಭಾಗದ ಪ್ಲಾಸ್ಟಿಕ್ ಕೊನೆಗೆ ಸೇರುವುದು, ನಾವೆಲ್ಲ ದೊಡ್ಡ ಕಸದ ತೊಟ್ಟಿಯಂತೆ ಪರಿವರ್ತಿಸಿರುವ ವಿಶಾಲವಾದ ಸಾಗರಕ್ಕೆ.ಹಾಗಾದರೆ ಈ ಸಾಗರಕ್ಕೆ ಸೇರುವ ಪ್ಲಾಸ್ಟಿಕ್ ಗಳ ಗತಿ ಮತ್ತು ಪರಿಣಾಮಗಳೇನು???



ಸಮುದ್ರದಲ್ಲಿ "ಪ್ಲಾಸ್ಟಿಕ್ ಸಮುದ್ರ"

ಮನುಷ್ಯ ಪ್ಲಾಸ್ಟಿಕ್ ಗಳನ್ನು ಉಪಯೋಗಿಸಲು ಶುರು ಮಾಡಿದ್ದು ಸುಮಾರು 60 ವರ್ಷಗಳ ಈಚೆಗೆ. ಆದರೂ ನಾವು ಅದಕ್ಕೆ ಕೊಟ್ಟಿರುವ ಪ್ರಾಮುಖ್ಯತೆ ಅವುಗಳ ತಯಾರಿಕೆಯ ಪ್ರಮಾಣದಿಂದಲೇ ತಿಳಿಯಬಹುದು. ಪ್ರತೀ ವರುಷ ಸುಮಾರು *245 ಮಿಲಿಯನ್ ಟನ್* ನಷ್ಟು ಪ್ಲಾಸ್ಟಿಕ್ ತಯಾರಿಕೆ ಆಗುತ್ತಿದೆ. ಅಂದರೆ ಹೆಚ್ಚು ಕಡಿಮೆ ಈ ಭೂಮಿಯ ಮೇಲಿರುವ ಪ್ರತಿ ಮನುಷ್ಯನಿಗೆ *35 ಕೆ.ಜಿ*ಯಂತೆ. ಈ ಹಿಂದೆ ಹೇಳಿದ ಹಾಗೆ ಹೆಚ್ಚಾಗಿ ಸಮುದ್ರ ಸೇರುವ ಇಂತಹ ಪ್ಲಾಸ್ಟಿಕ್, ಸಮುದ್ರ ಸೇರುವ ಮುಂಚೆ ಬೇರೆ ಬೇರೆ ಕಾರಣಗಳಿಂದ ಚಿಕ್ಕ ಚಿಕ್ಕ ಚೂರುಗಳಾಗುತ್ತವೆ. ಇಂತಹ ಚೂರುಗಳಲ್ಲಿನ ಪ್ಲಾಸ್ಟಿಕ್‌ಗಳು ಸಮುದ್ರದಲ್ಲಿ ಜೈರ್(gyre)ಗಳಾಗಿ ಶೇಖರಿಸಲ್ಪಡುತ್ತವೆ.



ಸಮುದ್ರದಲ್ಲಿ ತೇಲುತ್ತಿರುವ ಪ್ಲಾಸ್ಟಿಕ್ ಜೈರ್ (ಜೈರ್ ಎಂದರೆ ಸಮುದ್ರದ ಮೇಲೆ ತೇಲುವ ಪ್ಲಾಸ್ಟಿಕ್‌ಗಳ ಗುಂಪುಗಳು)

ಈ ತೇಲುವ ಪ್ಲಾಸ್ಟಿಕ್ ಗಳ ಪರಿಣಾಮಗಳ ಬಗ್ಗೆ ಹೆಚ್ಚು ತಿಳಿಯಲು Woods Hole ಎಂಬ ಸಂಸ್ಥೆಯ ಸಂಶೋಧಕರು ಈ ತೇಲುವ ಪ್ಲಾಸ್ಟಿಕ್‌ಗಳನ್ನು ಹಿಡಿದು, ಅವುಗಳ ಮೇಲಿನ ಬ್ಯಾಕ್ಟೀರಿಯಗಳನ್ನು ಗುರುತಿಸಿ ಅವುಗಳು ತಂದೊದಗುವ ಪರಿಣಾಮಗಳನ್ನು ತಿಳಿಯಲು ಹೊರಟಾಗ ಸಮುದ್ರದಲ್ಲಿ ದೊರೆತ ಪ್ಲಾಸ್ಟಿಕ್‌ನಲ್ಲಿ ಹೆಚ್ಚಾಗಿ ಪಾಲಿಥೀನ್ ಮತ್ತು ಪಾಲಿಪ್ರೋಪಿಲೀನ್ (polyethylene and polypropylene) ವಿಧವಾಗಿದ್ದವು.ಅವುಗಳ ಮೇಲೆ ಅವರಿಗೆ ವಿವಿಧ ಬಗೆಯ ಬಾಕ್ಟೀರಿಯಾಗಳು ದೊರೆತವು. ಹಾಗು ಈ ಎರಡು ವಿಧದ ಪ್ಲಾಸ್ಟಿಕ್‌ನಲ್ಲೂ ಸಮನಾಗಿಯೆ ಇರುತ್ತಿದ್ದವು. ಆದರೆ ಮೊದಲಿನ ಪ್ಲಾಸ್ಟಿಕ್ ಹಗುರ ಹಾಗೂ ನಯವಾದ

ಮೇಲ್ಮೈ ಹೊಂದಿತ್ತು, ಆದ್ದರಿಂದ ಇಂತಹ ಪ್ಲಾಸ್ಟಿಕ್ ಮೇಲೆ ಸುಮಾರು 1000 ವಿವಿಧ ಬಗೆಯ ಬ್ಯಾಕ್ಟೀರಿಯಗಳು ಇದ್ದವು. ಹಾಗಾದರೆ ಇವುಗಳು ಈ ರೀತಿ ಪ್ಲಾಸ್ಟಿಕ್ ನ ಮೇಲೆ ಏಕೆ ಇರಬೇಕು? ಎಂಬ ಸಂದೇಹ ಬರುವುದು ಸಹಜ. ಆಶ್ಚರ್ಯವಾಗಬಹುದು ಆದರೆ ಈ ಬಾಕ್ಟೇರಿಯಾಗಳಲ್ಲಿ ಕೆಲವು ಆ ಪ್ಲಾಸ್ಟಿಕ್‌ನನ್ನೇ ತಿನ್ನುತ್ತಿದ್ದವಂತೆ. ಕೆಲವು ಮಾತ್ರ..! ಉಳಿದವುಗಳ ಉದ್ದೇಶ ಸರಿಯಾಗಿ ತಿಳಿಯದು. ಆದರೆ ಈ ಬ್ಯಾಕ್ಟೀರಿಯಗಳಲ್ಲಿ ಕೆಲವು **ಮನುಷ್ಯರಿಗೆ ಹಾಗೂ ಪ್ರಾಣಿಗಳಿಗೆ** ರೋಗಗಳನ್ನು ತರುವ ಜಾತಿಯವೂ ಆಗಿದ್ದವು. ಅಷ್ಟೇ ಅಲ್ಲದೆ ಇನ್ನೂ ಕೆಲವು ಬ್ಯಾಕ್ಟೀರಿಯಗಳು ನಮಗೆ ಈ ಹಿಂದೆ ವಿಷಕಾರಿಯಾಗಿದ್ದ, ಈಗ ಉಪಯೋಗಿಸದೆ ಇರುವ **DDT** ಹಾಗೂ ಕೆಲವು **ಕೀಟನಾಶಕ**ಗಳನ್ನು ಸ್ಪಂಜಿನಂತೆ ಹೀರಿಕೊಳ್ಳುತ್ತಿದ್ದವಂತೆ. ಹೀಗೆ ಹೀರಿಕೊಂಡು ಆ ಪ್ಲಾಸ್ಟಿಕ್‌ಗಳ ಮೇಲೆ ಪದರದಂತೆ ತಯಾರಾಗಿ, ಅವುಗಳು ನೀರಿನಲ್ಲಿ ವಾಸಿಸುವ ಪ್ರಾಣಿಗಳಿಗೆ ಆಹಾರದಂತೆ ಕಂಡು ಪ್ರಾಣಿಗಳು ತಿನ್ನುವ ಅಪಾಯವೂ ಇದೆ.!!

ಓಹ್ ಇದೆಲ್ಲಾ ಪ್ರಾಣಿಗಳಿಗೆ ಹಾಗು ಕೇವಲ ಸಮುದ್ರ ತೀರದಲ್ಲಿ ವಾಸಿಸುವವರಿಗೆ ಮಾತ್ರ ಎಂದುಕೊಂಡರೆ ಅದು ಮೂರ್ಖತನವೇ ಸರಿ. ಸಂಶೋಧನೆಯ ಪ್ರಕಾರ 1 ಕೆ.ಜಿ ಸಮುದ್ರದ ಉಪ್ಪಿನಲ್ಲಿ 550-681 ಕಣಗಳು ಪ್ಲಾಸ್ಟಿಕ್‌ಗಳಾಗಿದ್ದವು ಹಾಗೂ 1 ಕೆ.ಜಿ ಕೆರೆಯ ಉಪ್ಪಿನಲ್ಲಿ 43-364 ಕಣಗಳು ಪ್ಲಾಸ್ಟಿಕ್ ಆಗಿದ್ದವು. ಹಾಗಾದರೆ ನಾವು 'ಉಪ್ಪಿಗಿಂತ ರುಚಿ ಬೇರೆಯಿಲ್ಲ' ಎಂದು ತಿನ್ನುವ ಉಪ್ಪಿನಲ್ಲಿಯೇ ಹೀಗೆ ನಾವೇ ಎಸೆದ ಪ್ಲಾಸ್ಟಿಕ್ ಕೊನೆಗೆ ನಮ್ಮ ಹೊಟ್ಟೆಗೇ ಸೇರುತ್ತಿದೆ. ಹಾಗಾದರೆ ಸಮುದ್ರದ ತೀರಕ್ಕೆ ಎಷ್ಟೋ ದೂರವಿರುವ ನಮಗೆ ಬೂಮರಾಂಗ್ ನಂತೆ ಪುನಃ ಬರುತ್ತಿದೆ. ಇದೆಲ್ಲಾ ಗಮನಿಸಿದರೆ 'ಮಾಡಿದ್ದುಣ್ಣೋ ಮಹಾರಾಯ' ಎಂದು ಪ್ರಕೃತಿಯೇ ನಾವು ನೀಡಿದ್ದನ್ನು ನಮಗೇ ಉಣಬಡಿಸುತ್ತಿದೆ..!! ಏನೇ ಆದರೂ ಸರಿಯಾಗಿ ತಿಳಿಯದ ಈ ಪ್ಲಾಸ್ಟಿಕ್ ಎಂಬ ಮಾರಕದ ದುಷ್ಪರಿಣಾಮಗಳನ್ನು ದೊಡ್ಡ ಪ್ರಮಾಣದಲ್ಲಿ ಎದುರಿಸುವ ದಿನಗಳನ್ನು ಬೇಗನೇ ಸಮೀಪಿಸುತ್ತಿದ್ದೇವೆ ಎಂದೆನಿಸುತ್ತದೆ. ಆದ್ದರಿಂದ ಆ **ಪ್ಲಾಸ್ಟಿಕ್ ಪ್ರಪಂಚದ** ದಿನಗಳು ಬಾರದ ಹಾಗೆ ಎಚ್ಚೆತ್ತುಕೊಳ್ಳುವುದು **ಅನಿವಾರ್ಯ!**



**ಕೃಪೆ:** ScienceNews for Students **ಮತ್ತು** Google images

- ಜೈ ಕುಮಾರ್ .ಆರ್
ಬೆಂಗಳೂರು.



# ನೇಸರ

ಮುಂಜಾನೆಯ ಮಂಜು ಮುರಿದು
ಮುದದಿಂದ ಮೂಡಿಬಂದ ನೇಸರ
ಮುನ್ನ ತಿಳಿ ನಿಶೆಯ ಸರಿಸಿ
ಮುನಿಸ ಉಷೆಯ
ಗಾನ ಮುನ್ನ ಎದ್ದು ನಮಿಸುವಂತೆ.
ಮುಕುಟ ಪ್ರಾಯ ನಿನ್ನುದಯ
ಮುಂಚೆ ಇನ್ನು ಕಂಡೇ ಇಲ್ಲ ಮುದದಿ ನಾದ ಕೋಕಿಲ
ಮುಂಬಾಗಿಲೇ ಬೆಂಬಲ.
ಮುರಿದು ಏಳಲಾಲಸ್ಯ
ಮುನ್ನ ತೀರದಾದ ಬಯಕೆ ಮುಸುಡಿ ಮೇಲೆ ಕಿರಣ ಬೀಳೆ
ಮುದುಡಿ ಹೋಯ್ತು ಚಂದ್ರಿಕೆ
ಮುಳುವಿಲ್ಲದ ಚೈತನ್ಯಕೆ ಮುರುಟಾಗಿಹೆ ನೀನು
ಮುಸಲಧಾರೆ ಧರೆಗೆರೆಗಲು
ಮುಂದಾಳುವೇ ನೀನು
ಮುಗಿಯಲಿರುವ ಕವನವಲ್ಲ
ಮುಗಿಲಿನಂತೆ ಅತಿ ಅಗಾಧ ಮುಕ್ತಾಯದ ಕ್ರಾಂತಿಗೆ
ಮುಂದೆ ಬರೆವೆ ಹಾದಿಗೆ...

- ನಂದಕುಮಾರ್ ಹೊಳ್ಳ,
ಉಡುಪಿ.

# ಪ್ರಕೃತಿ ಬಿಂಬ



© ಹರಿಹರನ್ .ಐ .ಎಸ್ ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ಚಿಟ್ಟುಗುಟುರ (**Coppersmith Barbet),** ಎಲೆ ಹಸಿರು ಬಣ್ಣದ ಒಂದು ಸುಂದರವಾದ ಪಕ್ಷಿ. ದೊಡ್ಡ ದೊಡ್ಡ ಮರಗಳು ಇರುವಲ್ಲಿ ಕಂಡುಬರುತ್ತವೆ. ಆಲ, ಬಸಿರಿ, ಗೋಣಿ ಮರಗಳು ಹಣ್ಣು ಬಿಟ್ಟಾಗ ಮರದ ಮೇಲೆ ಕುಳಿತು ಕೂಗುತ್ತಿರುತ್ತವೆ. ಒಣಗಿದ ರೆಂಬೆಗಳಲ್ಲಿ ಕೊರೆದು ಪೊಟರೆ ಮಾಡಿ ಗೂಡು ಕಟ್ಟುತ್ತವೆ. ಒಮ್ಮೆ ಕೊರೆದು ಗೂಡುಮಾಡುವಾಗ ನನ್ನ ಕ್ಯಾಮೆರಾ ಕಣ್ಣಿಗೆ ಸೆರೆಸಿಕ್ಕ ಚಿಟ್ಟುಗುಟುರ ಹಕ್ಕಿ.



© ಹರಿಹರನ್ .ಐ .ಎಸ್ ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ನೀಲಿ ಹುಳಗುಳುಕ (**Verditer flycatcher)** ಮುಂಜಾನೆಯ ಒಂದು ದಿನ ಬೆಳಗ್ಗೆ ನಮ್ಮ ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದಲ್ಲಿ ತೆಗೆದ ಚಿತ್ರ ಇದು. ವರ್ಷದ ಚಳಿಗಾಲದಲ್ಲಿ ಮಾತ್ರ ಈ ಪ್ರದೇಶದಲ್ಲಿ ಕಾಣಸಿಗುವ ಹಕ್ಕಿ. ಸಾಮಾನ್ಯವಾಗಿ ಏಷ್ಯಾದ ಆಗ್ನೇಯ ಭಾಗಗಳಲ್ಲಿ ಕಂಡುಬಂದರೂ ಸಹ ಅರೆಮಲೆನಾಡು ಮತ್ತು ನಿತ್ಯ ಹರಿದ್ವರ್ಣದ ಕಾಡುಗಳಲ್ಲಿ ಮಾತ್ರ ಹೆಚ್ಚಾಗಿ ಕಾಣಿಸುತ್ತವೆ. ಬನ್ನೇರುಘಟ್ಟದಂತಹ ಎಲೆ ಉದುರುವ ಕಾಡುಗಳಲ್ಲಿ ಕಾಣಿಸುವುದು ಕಡಿಮೆ ಆದರೆ ವರ್ಷದಲ್ಲೊಮ್ಮೆ ವಲಸೆ ಬರುವುದುಂಟು... ಕ್ಯಾಮೆರಾಗೆ ಆಗಾಗೆ ಸಿಗುವುದೂ ಉಂಟು. ಈ ಹಕ್ಕಿಯು **IUCN** ನ ಕೆಂಪು ಪಟ್ಟಿಯಲ್ಲಿದೆ. ಇವುಗಳ ಸಂರಕ್ಷಣೆ ಬಹಳ ಮುಖ್ಯವೂ ಕೂಡ.



© ಹರಿಹರನ್ .ಐ .ಎಸ್ ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ಕೆಂಪು ಕೊರಳ (**Tickell's blue flycatcher),** ಮೈ ಕಪ್ಪು ಮಿಶ್ರಿತ ನೀಲಿ ಬಣ್ಣ. ಹಣೆಯ ಮೇಲೆ ತಿಳಿ ನೀಲಿ ಪಟ್ಟೆ ಇದೆ. ಕುತ್ತಿಗೆ, ಎದೆಯ ಭಾಗಗಳಲ್ಲಿ ಕಿತ್ತಳೆ ಬಣ್ಣವಿದೆ, ಅದಕ್ಕೆ ಇದು ಕೆಂಪು ಕೊರಳ...!, ಬೆಳಗಿನ ಜಾವ ಎಲ್ಲ ಹಕ್ಕಿಗಳಿಗೂ ಮುನ್ನ ಎದ್ದು ಮೆಲು ದನಿಯಲ್ಲಿ ಸಿಳ್ಳೆಯಂತೆ ರಾಗಾಲಾಪನೆ ಮಾಡುತ್ತದೆ. ಒಮ್ಮೆ ನಾನು ಈ ರೀತಿಯ ರಾಗಾಲಾಪನೆಯ ಸದ್ದನ್ನು ಕೇಳಿ ಹಿಂಬಾಲಿಸಿದೆ, ಆಗ ಸಿಕ್ಕ ಸುಂದರ ಬಣ್ಣ ಬಣ್ಣದ ಈ ಛಾಯಾಚಿತ್ರ.



© ಹರಿಹರನ್ .ಐ .ಎಸ್ ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ಇದು ಮಡಿವಾಳ ಹಕ್ಕಿ (**Oriental Magpie-Robin).** ಎಲೆ ಉದುರುವ ಕುರುಚಲು ಕಾಡುಗಳಲ್ಲಿ, ಹಳ್ಳಿ-ಪೇಟೆಗಳ ಪಕ್ಕದಲ್ಲಿನ ಕುರುಚಲು ಪ್ರದೇಶಗಳಲ್ಲಿ ಗೂಡು ಮಾಡುತ್ತವೆ. ಮುಂಜಾವಿನಲ್ಲಿ ಮಧುರವಾದ ಸಿಳ್ಳೆಯಂತೆ ರಾಗಾಲಾಪನೆ ಮತ್ತು ಬೇರೆ ಹಕ್ಕಿಗಳಂತೆ ಅನುಕರುಣೆ ಮಾಡುತ್ತದೆ, ಈ ರೀತಿಯಂತೆ ರಾಗಾಲಾಪನೆಯ ವೇಳೆ ಬನ್ನೇರುಘಟ್ಟ ಕಾಡಿನಲ್ಲಿ ತೆಗೆದ ಛಾಯಾಚಿತ್ರ. ಈ ಹಕ್ಕಿಯು ಬಾಂಗ್ಲಾದೇಶದ ರಾಷ್ಟ್ರೀಯ ಪಕ್ಷಿಯೂ ಕೂಡ...!